ಒಂದಾಣೆ ಮಾಲೆ 240

# ಬಾಲಪದ್ಯಾವಳಿ



ಬರೆದವರು: ಶ್ರೀ ಅಮ್ಮೆಂಬಳ ಅನಂತಯ್ಯ ನಾವಡ,
ವಿದ್ವಾನ್, ಮಂಗಳೂರು.

1959 ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1959ನೇ ಜೂನ್ ತಿಂಗಳ ನಾಲ್ಕನೆಯ ವಾರದ ವರೆಗೆ 240 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

240 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4674 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಬಾಲಪದ್ಯಾವಳಿ

---

## ಬಾಲರ ಭಜನೆ

ಕಿರಿಯ ಮಕ್ಕಳನು ಪಾಲಿಸು! ದೇವ!
ತೊದಲು ಮಾತಿನಲಿ ಭಜಿಸುವೆವು!
ಹಿರಿತನ ದೊರಕುವ ತೆರದಲಿ ಜ್ಞಾನದ
ದೀಪವ ಬೆಳಗಿಸು! ಪೂಜಿಪೆವು!
ಅಬೋಧ ಬಾಲಕರಾಗಿಹ ನಮಗೆ
ನೀನೇ ತಾಯಿ—ತಂದೆ!
ಸುಬೋಧವನು ದಯಪಾಲಿಸಿ ನಡೆಸೈ
ಕೈಪಿಡಿದೆಮ್ಮನು ಮುಂದೆ!

## ಪ್ರತಿಜ್ಞೆ

ಕನ್ನಡ ಮಾತೆಯ ಮಕ್ಕಳು ನಾವು
ಪ್ರತಿದಿನ ಶಾಲೆಗೆ ಹೋಗುವೆವು!
ತಂದೆ ತಾಯಿಗಳ, ಕಲಿಸುವ ಗುರುಗಳ
ಆಜ್ಞಾಧಾರಕರಾಗುವೆವು!
ಕೋಪ ತಾಪಗಳ ದೂರೀಕರಿಸುತ
ವಿನಯ ಶಾಂತಿಗಳ ತಾಳುವೆವು!
ಪಾಪಕರ್ಮಗಳ ಮಾಡದೆ ಒಳ್ಳೆಯ
ಕೆಲಸಗಳನ್ನೇ ಮಾಡುವೆವು!
ಸರ್ವರನೂ ಮಮಕಾರದಿ ಪ್ರೀತಿಸಿ
ವಿಶ್ವದಿ ಸ್ನೇಹವ ಗಳಿಸುವೆವು!
ಸರ್ವಸ್ವವನೂ ಅರ್ಪಿಸಿ ದೀನರ
ದುಃಖಗಳನು ಪರಿಹರಿಸುವೆವು!

ಸುಳ್ಳನ್ನಾಡದೆ ಸತ್ಯವ ಬಿಡದೆ
ಪರೋಪಕಾರವ ಮಾಡುವೆವು!
ದೇವರ ನೆನೆಯುತ ವಿದ್ಯೆಯ ಕಲಿಯುತ
ಸುಖಸಂತೋಷದಿ ಬಾಳುವೆವು!

## ನೀತಿಯ ಪಾಠ!

ಸಿದ್ಧಾರ್ಥನು ತಾ ವಿಹರಿಸುತಿದ್ದನು
ಅರಮನೆ ಹೂವಿನ ತೋಟದಲಿ!

ಬಾಣವು ತಾಗಿದ ಹಂಸವು ಒಂದು
ಅಲ್ಲಿಯೆ ಬಿದ್ದಿತು ಚೀರುತಲಿ!

ರಾಜಕುಮಾರನು ಹಂಸವನೆತ್ತುತ
ಶುಶ್ರೂಷೆಯನು ಮಾಡಿದನು!

ಬಾಣವ ಹೊಡೆದವ ಅಲ್ಲಿಗೆ ಬಂದು
ಪಕ್ಷಿಗಾಗಿ ಜಗಳಾಡಿದನು!

ಹಂಸವ ಕೊಡದಿರೆ ಕೋಪವ ತಾಳುತ
ದೂರನ್ನಿತ್ತನು ರಾಜನಲಿ!

ರಾಜನ ಮಂತ್ರಿಯು ಇಬ್ಬರ ನ್ಯಾಯವ
ತೀರಿಸಿದನು ಬಲು ಯುಕ್ತಿಯಲಿ!

"ಪಕ್ಷಿಯು ಯಾರನು ಬಯಸುತಲಿಹುದೋ
ಅವನನು ಸೇರಲಿ ಪ್ರೀತಿಯಲಿ!"

ಬೇಟೆಯ ಹುಡುಗನು ಕರೆಯಲು ಹಂಸವು
ದೂರಕೆ ಹೋಯಿತು ಚೀರುತಲಿ!

ಸಿದ್ಧಾರ್ಥನು "ಬಾ!" ಎನ್ನಲು ಪಕ್ಷಿಯು
ಬಂದಿತು ಮಡಿಲಿಗೆ ಹಾರುತಲಿ!

"ದಯೆಯೇ ಶ್ರೇಷ್ಠವು!" ಎಂಬುದನವನು
ಎಳೆತನದಲ್ಲಿಯೇ ತೋರುತಲಿ!

"ಕರುಣಾಮೂರ್ತಿಯು ಬುದ್ಧನು!" ಎಂಬ
ಸಾರ್ಥಕ ನಾಮವ ಗಳಿಸಿದನು!
ನೀತಿಯ ಪಾಠವ ಕಲಿಸುತಲಿಂತು
ಲೋಕೋದ್ಧಾರವ ಮಾಡಿದನು!

## ಸ್ವಾತಂತ್ರ್ಯದ ಹಾಡು!

ಸ್ವಾತಂತ್ರ್ಯೋತ್ಸವ ಸಂಭ್ರಮ ಸಂತಸ
ದೇಶದಲ್ಲೆಲ್ಲಾ ಹರಡಿಹುದು!
ಸ್ವಾತಂತ್ರ್ಯವೀರರ ಸಾಹಸವೆಲ್ಲವು
ಜನತೆಯ ನೆನಪಿಗೆ ಬರುತಿಹುದು!
ಭಾರತದೇಶಕೆ ಪರದೇಶದ ಬಿಳಿ
ಜನರೆಲ್ಲರು ಬರತೊಡಗಿದರು!
ಭಾರತ ಪುತ್ರರ ಧನ-ಭೂಮಿಗಳನು
ವಶಮಾಡುತ ಬಲು ಸೊಕ್ಕಿದರು!
ಪರಕೀಯರ ದಬ್ಬಾಳಿಕೆಯಿಂದಲಿ
ಸರ್ವರು ಬೇಸರ ತಾಳಿದರು!
ನರರಾಕ್ಷಸರನು ನಾಶವ ಮಾಡಲು
ಒಮ್ಮತದಿಂದಲಿ ಕೂಡಿದರು!
ವೀರ ಶ್ರೀಯುತೆ ಲಕ್ಷ್ಮೀಬಾಯಿಯು
ಮೊದಲನೆ ಸಮರವ ಹೂಡಿದಳು!
ಶೂರರ ಬೆಂಬಲದಿಂದಲೆ ಕಾದುತ
ರಣದಲಿ ಹರಣವ ನೀಗಿದಳು!
ಸ್ವಾತಂತ್ರ್ಯದಾಹದ ಭಾರತಪುತ್ರರು
ಕ್ರಾಂತಿಯನೆಸಗಲು ತೊಡಗಿದರು!
ನೀತಿವಿರೋಧಿಗಳನು ಪರಿಭವಿಸುತ
ಬಲು ಸಾಹಸವನು ತೋರಿದರು!

ಭಾರತವೀರರು ರಕ್ತವ ಸುರಿಸುತ
ಶತ್ರುಗಳೊಂದಿಗೆ ಸೆಣಸಿದರು!
ಭಾರತಮಾತೆಯು ಬಂಧನ ಬಿಡಿಸಲು
ನಿಜ ಜೀವಾವಧಿ ಕಾದಿದರು!
"ಸ್ವಾತಂತ್ರ್ಯ ನಮ್ಮಯ ಜನ್ಮದ ಹಕ್ಕು!"
ಎನ್ನುತ ತಿಲಕರು ಸಾರಿದರು!
ಸ್ವತಂತ್ರ ಸೈನ್ಯವ ಕೂಡಿಸಿ ಕಾದುತ
ವೀರ ಸುಭಾಸರು ಅಗಲಿದರು!
"ಶಾಂತಿಯು ಸೌಖ್ಯದ ಸಾಧಕ"ವೆಂಬುದ
ಗಾಂಧಿಮಹಾತ್ಮರು ತೋರಿದರು!
ಸ್ವಾತಂತ್ರ್ಯಸುಖವನು ಜನತೆಗೆ ನೀಡುತ
ಸತ್ಯದ ಬೆಳಕನು ಬೀರಿದರು!
ಸ್ವಾತಂತ್ರ್ಯೋತ್ಸವ ಸಂಭ್ರಮ ಸಂತಸ-
ದಲಿ ನಾವೆಲ್ಲರು ಹಿಗ್ಗುವೆವು!
ಸ್ವತಂತ್ರ ರಾಜ್ಯದ ಸುಖಸಂಪದವನು
ಸರ್ವರು ಪಡೆಯುತ ಬಾಳುವೆವು!

## ವಸಂತ ಬಂದ!

ಬಂದಾ! ಬಂದಾ! ವಸಂತ ಬಂದಾ!
ಜನಜೀವನಕೆ ಸಂತಸ ತಂದಾ!
ಲತೆಗಳು ಚಿಗುರಿ ಮುಗುಳುಗಳರಳಿ
ಗಿಡಗಳು ಮರಗಳು ಸಂತಸ ತಾಳಿ
ತಾವೂ ನಗುತ ಲೋಕವ ನಗಿಸಿ
ಗಿಳಿ ಕೋಗಿಲೆಗಳ ಹಾಡಿಸಿ ಮೆರೆಸಿ
ಬಂದಾ! ಬಂದಾ! ವಸಂತ ಬಂದಾ!

ಕೊಳದಲಿ ತಾವರೆಗಳು ಅರಳಿರಲು
ತಂಪಿನ ಗಾಳಿಯು ಬೀಸುತಲಿರಲು
ಲೋಕವು ಸಂತಸದಿಂದಲಿ ಕುಣಿಯಲು
ದೇವನ ಮಹಿಮೆಯು ಮೆರೆಯುತಲಿರಲು
ಬಂದಾ! ಬಂದಾ! ವಸಂತ ಬಂದಾ!

## ಒಳ್ಳೆಯ ಬಾಲಕನು ಯಾರು?

ಸುಮ್ಮನೆ ಸಮಯವ ಕಳೆಯದೆ ಯಾರು
ಕೆಲಸವ ಮಾಡುತಲಿರುತಿಹನೋ
ಸತ್ಯವ ಹೇಳುತ ಶಾಂತಿಯ ತಾಳುತ
ಎಲ್ಲರ ಯಾರು ಪ್ರೀತಿಪನೋ
ಅವನೇ ಒಳ್ಳೆಯ ಬಾಲಕನು!
ಅವನೇ ದೇಶದ ಸೇವಕನು!

ಕೋಪತಾಪಗಳ ತಾಳದೆ ಸ್ನೇಹದ
ಮಾತನು ಯಾರು ನುಡಿಯುವನೋ
ಪರರಿಗೆ ಮೋಸವ ಮಾಡದೆ ತನ್ನ
ತಪ್ಪನು ಯಾರು ಒಪ್ಪುವನೋ
ಅವನೇ ಒಳ್ಳೆಯ ಬಾಲಕನು!
ಅವನೇ ದೇಶದ ಸೇವಕನು!

ಪಾಪದ ಕೆಲಸಕೆ ಹೆದರುತ ಪರರಿಗೆ
ಯಾರು ಸಹಾಯವ ಮಾಡುವನೋ–
ದೀನರ ಕಷ್ಟವ ನೀಗುತ ಅವರಿಗೆ
ಸುಖವನು ಯಾರು ನೀಡುವನೋ–
ಅವನೇ ಒಳ್ಳೆಯ ಬಾಲಕನು!
ಅವನೇ ದೇಶದ ಸೇವಕನು!

ಮಾತಾಪಿತೃಗಳ ಗುರುಗಳ ಹಿರಿಯರ
ಸೇವೆಯನಾರು ಮಾಡುವನೋ–

ಉತ್ತಮ ವಿದ್ಯೆಯ ಪಡೆಯುತ ದೇಶದ
ಹಿತವನು ಯಾರು ಬಯಸುವನೋ–
ಅವನೇ ಒಳ್ಳೆಯ ಬಾಲಕನು!
ಅವನೇ ದೇಶದ ಸೇವಕನು!

## ಪ್ರತ್ಯಕ್ಷ ಪಾಠ!

ಶ್ರೀ ಶಂಕರಾಚಾರ್ಯರೊಂದು ದಿನದಲ್ಲಿ—
ಈಶನನು ಭಜಿಸುತ್ತ ನಿಜಚಿತ್ತದಲ್ಲಿ—
ಎತ್ತಲೋ ಹೊರಟಿಹರು ಶಿಷ್ಯರೊಡಗೂಡಿ—
ತತ್ವವನು ತಿಳುಹಿಸುವ ಆಶೆಯಿಂ ಕೂಡಿ.
ಮುಂದೆ ಸಿಕ್ಕಿದುದೊಂದು ಮದ್ಯದಂಗಡಿಯು—
ಮಂದಬುದ್ಧಿಯ ಜನರ ಸಂತಸದ ಗುಡಿಯು!
ಮದ್ಯಗಂಧವ ಗ್ರಹಿಸಿ ಶಿಷ್ಯರಲಿ ಕೆಲರು—
ಹೃದ್ಯವಾಗಿದೆಯೆಂದು ತಿಳಿದರಕುಶಲರು!
ಆಚಾರ್ಯರಾಗ ನೋಡಿದರು ಹಿಂತಿರುಗಿ!
ಆಚಾರಹೀನರಾಗುವರೆಂದು ಮರುಗಿ—
ಮದ್ಯವನು ಕುಡಿಯಲಾಶಿಪ ಶಿಷ್ಯಜನಕೆ,
ಸದ್ಯದಲಿ ಪಾಠವನು ಕಲಿಸಲಿದೆ ಬಯಕೆ!
ಎಂದು ಶಿಷ್ಯರನೆಲ್ಲ ಕರೆಯುತ್ತ ಜವದಿ
ಮುಂದೆ ಹೋಪರು ಮದ್ಯದಂಗಡಿಯ ದಾಟಿ!
ಕಂಚು ಕರಗಿಪ ತಾಣವೊಂದು ಗೋಚರಿಸೆ—
ಮಿಂಚಿನಂಪದಿ ಒಂದು ಯೋಚನೆಯು ನೆಲಸೆ—
ಕಂಚಿನಂಗಡಿಗೈದಿ ಬೆಂಕಿಯಲಿ ಕುದಿವ
ಮಿಂಚುತಿಹ ಕಂಚುರಸವನ್ನು ತೋರಿಸುತ
"ಮದ್ಯ ಕುಡಿಯುವ ಮೊದಲು ಕುಡಿಯಿರಿದನೀಗ!
ಇದನು ಕುಡಿದರೆ ಮಾತ್ರ ಅದ ಕುಡಿಯಬಹುದು!
ಇದು ಬಹಳ ಬಿಸಿಯುಹುದು ಎಂದು ತಿಳಿಯುವಿರಾ?
ಅದರಿಂದ ತಲೆಬಿಸಿಯು— ಮೂಢವಾಗುವುದು!"

ಎಂದು ಗುರುಗಳು ಹೇಳಲದನು ಕೇಳುತ್ತ
ಮಂದಬುದ್ಧಿಗೆ ಹೇತು ಮದ್ಯವೆನ್ನುತ್ತ
ಸರ್ವರೂ ಗುರುಗಳಿಗೆ ನಮಿಸಿದರು ಬಂದು
“ಸರ್ವಾಪರಾಧಗಳ ಕ್ಷಮಿಸಬೇಕೆಂ”ದು!

## ಹಸಿವೆಯಾಗುತಿದೆ! ನೀಡುವಿರಾ?

ಬಂದೆನು ದೂರದ ಪರವೂರಿಂದ!
ತಂದೆನು ಹಸಿವೆಯು ಹೊಟ್ಟೆಯನೊಂದ!
ಹೆರವರ ಬಯ್ಗುಳನೆಷ್ಟೋ ತಿಂದ-
ಕಾಲೊಂದಿಲ್ಲದ ಭಿಕ್ಷುಕ ಬಂದ!
ಹಸಿವೆಯಾಗುತಿದೆ! ನೀಡುವಿರಾ?
ತಾಯಿ ತಂದೆಗಳ ಕಳೆದಿಹೆನಲ್ಲಾ!
ಬಂಧು ಬಳಗದವರಾರೂ ಇಲ್ಲ!
ಹೇಳುವರಿಲ್ಲ! ಕೇಳುವರಿಲ್ಲ!
ನೀವೇ ನನಗೆ ಬಂಧುಗಳೆಲ್ಲ!
ಹಸಿವೆಯಾಗುತಿದೆ! ನೀಡುವಿರಾ?
ಹುಟ್ಟಿದ ನಾಡು ನಾ ತಿಳಿದಿಲ್ಲ!
ಬೆಳೆಯುವ ಬೀಡು ವಿಶ್ವವೆ ಎಲ್ಲ!
ವಾಸಮಾಡುವ ಮನೆ ನನಗಿಲ್ಲ!
ಮುಂದಿನ ಗತಿಯನು ದೇವನು ಬಲ್ಲ!
ಹಸಿವೆಯಾಗುತಿದೆ! ನೀಡುವಿರಾ?
ಹುಟ್ಟಿದ ನಾಡು ನಾ ತಿಳಿದಿಲ್ಲ!
ಬೆಳೆಯುವ ಬೀಡು ವಿಶ್ವವೆ ಎಲ್ಲ!
ವಾಸ ಮಾಡುವ ಮನೆ ನನಗಿಲ್ಲ!
ಮುಂದಿನ ಗತಿಯನು ದೇವನು ಬಲ್ಲ!
ಹಸಿವೆಯಾಗುತಿದೆ! ನೀಡುವಿರಾ?
ಆತ್ಮಾಶೆಯ ನಾ ಪಡುವವನಲ್ಲ!
ಕೂಡಿಡುವಾಶೆಯ ತಳೆದವನಲ್ಲ!

ಅತಿ ಸುಖವ ಬಯಸುವ ಹಂಬಲವಿಲ್ಲ!
ಹಿಡಿ ಅನ್ನವೆ ನನ್ನಾಶೆಯು ಎಲ್ಲ!
ಹಸಿವೆಯಾಗುತಿದೆ ನೀಡುವಿರಾ!
ನನ್ನೀ ಒಡಲನು ತಣಿಸಿರಿ! ಧನಿಯೆ!
ಈ ಉಪಕಾರವ ಎಂದೂ ಮರೆಯೆ!
ಮಾಡುತ ನಿಮ್ಮಯ ಗುಣಗಾನವನು
ಊರೂರಿನಲಿ ತಿರುಗಾಡುವೆನು!
ಹಸಿವೆಯಾಗುತಿದೆ! ನೀಡುವಿರಾ?
ನಾ ಬಂದರೆ ಕದ ಮುಚ್ಚಲು ಬೇಡಿ!
ಕೊಬ್ಬಿದ ನಾಯನು ಛೂ! ಬಿಡಬೇಡಿ!
ದಿನವೂ ನಾ ಬರುವವನೇ? ನೋಡಿ!
ಹಿಡಿ ಅನ್ನವನು ಧನಿಗಳೆ! ನೀಡಿ!
ಹಸಿವೆಯಾಗುತಿದೆ! ನೀಡುವಿರಾ?

## ತಮ್ಮನು ಓದಿದ ಪಾಠ!

ಪಾಠವನೋದಲು ನಾ ಕುಳಿತಾಗ
ತಮ್ಮನು ಓಡುತ ಬಂದನು ಬೇಗ!
ಅಣ್ಣಾ! ನನಗೆ ಪುಸ್ತಕ ಬೇಕು!
ಬಣ್ಣದ ಚಿತ್ರದ ಪುಸ್ತಕ ಸಾಕು!"
ತಮ್ಮನ ಮಾತ ಕೇಳುತ ನಾನು
ಕೊಟ್ಟೆನು ಚಿತ್ರದ ಪುಸ್ತಕವನ್ನು!
"ನನಗೂ ಓದಲು ಬರುವುದು" ಎಂದು
ಪುಸ್ತಕ ಬಿಡಿಸಲು ತೊಡಗಿದನಂದು!
ಚಿತ್ರವ ನೋಡುತ ಓದಿದ ತಮ್ಮ!
ಕೂಡಲೆ ಅಲ್ಲಿಗೆ ಬಂದಳು ಅಮ್ಮ!
"ಅರಸು! ಆನೆ! ನಾಯಿ! ಬೆಕ್ಕು!
ದನದ ಹಾಲು! ಕೋಳಿಯ ಕೊಕ್ಕು!
ಅಮ್ಮನು ತಿಂಡಿಯ ಕೊಡುವಳು ನನಗೆ!

ಅಪ್ಪನು ಉಣ್ಣುತ ಹೋದರು ಹೋಗೆ!
ಅಜ್ಜನು ದಂಟೆಯನೂರುತ ನಡೆವ!
ಗುಡಿಸುವಳಜ್ಜಿಯು ಬಾಗುತ ಕಸವ!
ಹಚ್ಚುವಳಕ್ಕನು ಪೌಡರು ಮುಖಕೆ!
ಅಣ್ಣನು ಓದುವ ಅಪ್ಪನ ಭಯಕೆ!”
ಪುಸ್ತಕ ಮುಚ್ಚಿಕೊಟ್ಟನು ನನಗೆ!
ಕೈಹಿಡಿದೆಳೆಯುತ ಹೇಳಿದ ಕೊನೆಗೆ-
ನಾನೂ ಶಾಲೆಗೆ ಬರುವೆನು! ಅಣ್ಣಾ!
ಸ್ಲೇಟು-ಪುಸ್ತಕ-ಚೀಲ ಕೊಡಣ್ಣಾ!

## ಸಂಕ್ಷೇಪ ರಾಮಾಯಣ

ಕೋಸಲದೇಶದ ಶ್ರೀರಾಮಚಂದ್ರನ
ಸುಂದರ ಕಥೆಯನು ಹೇಳುವೆನು.

ಜಾನಕಿದೇವಿಯು ರಾಮನ ರಾಣಿಯು
ಬಹುತರ ವ್ಯಥೆಯನು ತಿಳಿಸುವೆನು!

ಶಿವಧನುವನು ಮುರಿದಿಕ್ಕುತ ಸೀತೆಯ
ವರಿಸಿದ ರಘುಕುಲ ಚಂದ್ರಮನು!

ಭಾರ್ಗವರಾಮನ ಗರ್ವವ ಮುರಿಯುತ
ಬಲು ಸಾಹಸವನು ತೋರಿದನು!

ರಾಮನು ಲಕ್ಷ್ಮಣ ಸೀತೆಯರೊಂದಿಗೆ
ಹೋದನು ಭೀಕರ ಕಾನನಕೆ!

ದಶಮುಖ ರಾವಣ ಸೀತಾಮಾತೆಯ-
ನೊಯ್ದನು ಲಂಕಾ ಪಟ್ಟಣಕೆ!

ರಾಮನು ಶರಧಿಯ ದಾಟುತ ನಡೆದನು
ಲಂಕೆಗೆ ಕಪಿಗಳ ಬಲದೊಡನೆ!

ಅಸುರನ ವಧಿಸುತ ಲೋಕವ ನಗಿಸುತ
ಬಂದನಯೋಧ್ಯೆಗೆ ಸತಿಯೊಡನೆ!

## ರೈತನ ಸೇವೆ!

ನಿನಗಿಲ್ಲ ವಿಶ್ರಾಂತಿ ಓ! ರೈತನೆ!
ಹಗಲಿರುಳು ದುಡಿಯುತಿಹೆ ಮರೆತು ಬೇನೆ!
ಸುಖಶಾಂತಿಯನು ತೋರ್ಪೆ ಜನತೆಗೆಲ್ಲ!
ನಿನಗೆ ಜೀವನದಲ್ಲಿ ಶಾಂತಿಯಿನಿತಿಲ್ಲ!
ಧನಿಕರೈಶ್ವರ್ಯವನು ವೃದ್ಧಿಗೊಳಿಸುತಿಹೆ!
ಅರೆ ಕಾಸಿಗಾದರೂ ಬೀದಿ ತಿರುಗುತಿಹೆ!
ಅನ್ನ ವಸ್ತ್ರಗಳನ್ನು ಜನರಿಂಗೊದಗಿಸುವೆ!
ಮಳೆ ಗಾಳಿ ಬಿಸಿಲುಗಳ ನೀ ಸಹಿಸುತಿರುವೆ!
ಗಡಿಯಾರದಂತೆ ಕೆಲಸವ ಮಾಡುತಿರುವೆ!
ಅನ್ಯರಿಂಗೆ ಹೊಸಮನೆಯ ರಚಿಸಿಕೊಡುವೆ!
ತಾನು ಬಡಗುಡಿಸಲಲಿ ವಾಸಿಸುತಲಿರುವೆ!
ಪರರಿಂಗುಪಕಾರಿ! ನಿನಗೆ ಅಪಕಾರಿ!
ಭಾರತದ ಭಾಗ್ಯಸಾಧಕ! ನೀ ಉದಾರಿ!

## ಅವತರಿಸು! ದೇವ!

ನವಮೋಹನ ಶ್ಯಾಮ! ಬಾ! ಕೃಷ್ಣದೇವ!
ನವನೀತರಸ ಮೋಹ! ನೀನೆಮ್ಮ ಕಾವ!
ಹಿಂದಿನಾ ಯುಗದಲ್ಲಿ ನರಕನನು ತರಿದೆ!
ಮುಂದಿಮಾರ್ಬಲಕೆಲ್ಲ ಹರುಷವನು ತೋರ್ದೆ!
ಸುರಲೋಕ ಸುಖಕಾಗಿ ವಾಮನನ ರೂಪ!
ಶರಲೋಕದಿಂ ಮಾಸಿತ್ತೆ ಬಲಿಯ ರೂಪ!
ಆನಂದ ಜಯಘೋಷ ಪೂರ್ಣ ಭ್ಯೂವ್ಯೋಮ!
ಆನಂದ ನಂದನನ ಬಹುಘನವು ಪ್ರೇಮ!
ಎತ್ತೆತ್ತಲೂ ಧೂಪ! ಸುತ್ತಲೂ ದೀಪ!
ಸುತ್ತಲೂ ಸಂತೋಷ! ಅಡಗಿತ್ತೆ ತಾಪ!
ಸ್ವಾತಂತ್ರ್ಯ ಸಿಕ್ಕಿಹುದು ಭಾರತಕೆ ಈಗ!
ಶಾಂತತೆಯ ಸುಖವನ್ನು ದೊರಕಿಸೈ ಬೇಗ!
ಇಂದೀಗೆ ನೀನೊಮ್ಮೆ ಅವತರಿಸು! ದೇವ!
ಮಂದಿಗಳ ಮುದಗೊಳಿಸು! ಪರಿಹರಿಸು ನೋವ!

## ನೆಹರು ಜಯಂತಿ

ಇಂದೇ ನೆಹರು ಜನ್ಮದಿನ!
ಮಕ್ಕಳ ಸಂತೋಷದ ಸುದಿನ!
ಎಲ್ಲಾ ಮಕ್ಕಳು ಹಿಗ್ಗುವರು!
"ನೆಹರು! ಜಯ! ಜಯ!" ಎನ್ನುವರು.
ಮೋತಿಲಾಲರ ವರಸುತನು–
ಭಾರತದೇಶದ ಭಾಸ್ಕರನು!
ಜವಹರ ನಾಮವು ಸಾರ್ಥಕವು!
ಮಾತೆಯು ಕೀರ್ತಿಯು ಸಾಥಕವು!
ಉಜ್ವಲ ವಜ್ರವು ಶ್ರೀನಿಧಿಯು–
ಲೋಕದ ಬೆಳಕಿಗೆ ಕಾರಣವು!
"ಮಾನ್ಯ ಜವಾಹರ! ಬೆಳಗುತಿಹೆ!
ಹಿಂದೂದೇಶವ ಬೆಳಗಿಸುವೆ!
ಎಳೆಯರ ಗೆಳೆಯನೆ! ಮಕ್ಕಳನು
ಪ್ರೀತಿಸುತಿಹೆ ಪ್ರತಿಯೊಬ್ಬರನು!"
ಎನ್ನುತ ಮಕ್ಕಳು ಸಾರುವರು!
ಸುಖಸಂತೋಷದಿ ನಲಿಯುವರು!




## ಬಾಪು ನಗುವನು

ಭಾರತೀಯರು ಸುಖವಾಗಿದ್ದರೆ—
ಭಾರತಬಾಲರು ನಲಿಯುತಲಿದ್ದರೆ—
ಭಾರತದೇಶವು ಸಮೃದ್ಧವಾದರೆ—
ಬಾಪೂ ಸ್ವರ್ಗದಿ ನೋಡುವನು!
ಬಾಪೂ ನಗುವನು! ನಲಿಯುವನು!

ಭಾರತ ಪುತ್ರರು ಒಂದಾಗಿದ್ದರೆ—
ವೈರವ ತಾಳದೆ ಸ್ನೇಹದಲಿದ್ದರೆ—
ಒಮ್ಮನ-ಸಮ್ಮತ ಮೆರೆಯುತಲಿದ್ದರೆ—
ಬಾಪೂ ಸ್ವರ್ಗದಿ ನೋಡುವನು!
ಬಾಪೂ ನಗುವನು! ನಲಿಯುವನು!

ದೇಶದ ಗುಡಿಯನು ಹಿಡಿಯುತಲಿದ್ದರೆ—
ದೇಶದ ಗೀತೆಯ ಹಾಡುತಲಿದ್ದರೆ—
ದೇಶದ ಹಿತವನು ಬಯಸುತಲಿದ್ದರೆ—
ಬಾಪೂ ಸ್ವರ್ಗದಿ ನೋಡುವನು!
ಬಾಪೂ ನಗುವನು! ನಲಿಯುವನು!

## ಮೋಡಗಳು

ಕರಿಮೋಡಗಳು ನಭದಲ್ಲಿ
ಯುದ್ಧದ ಸೈನಿಕರಂದದಲಿ—
ಮುಂದಕೆ ಮುಂದಕೆ ಸಾಗುತಿವೆ!
ಗಾಳಿಯು ಒಡನೆ ಓಡುತಿವೆ!
ಬೆಳ್ಳಿಯ ಬಳ್ಳಿಯು ಮಿಂಚುತಿದೆ!
ಕಣ್ಣುಗಳನು ಮುಚ್ಚಿಸುತಲಿದೆ!
"ಗಡಗಡ" ಗುಡುಗು ಕೇಳುತಿದೆ!
ಜನತೆಯ ತನುಮನ ನಡುಗುತಿದೆ!
ಸೂರ್ಯನ ಬಿಂಬವ ನುಂಗುತಿವೆ!
ಚಂದಿರಮಾಮನ ಮುಚ್ಚುತಿವೆ!
ತಾರೆಗಳನು ಮರೆಮಾಡುತಿವೆ!
"ಝುರ್! ಝುರ್!" ಮಳೆಯನು ಸುರಿಸುತಿವೆ!

## ಉಪಕಾರ ಸ್ಮರಣೆ

ಕನ್ನಡನಾಡಿನ ಮಕ್ಕಳು ನಾವು
ವಿನಯದಿ ನಮಿಪೆವು ಗಾಂಧೀ!
ಸ್ವಾತಂತ್ರ್ಯೋತ್ಸವ ಸಮಯದಿ ನಿನ್ನಯ
ಗುಣಗಳ ನೆನೆವೆವು ಗಾಂಧೀ!
ಯುದ್ಧವಿಲ್ಲದೆ ಪರದೇಶಿಗಳನು
ದೂರಕೆ ಸರಿಸಿದೆ ಗಾಂಧೀ!
ವಾಮನನಂತೆ ಶತ್ರುಗಳಿಂದ
ಭೂಮಿಯ ಪಡೆದೆ ಗಾಂಧೀ!
ಹಿಂದುಳಿದವರನು ಮುಂದಕೆ ತರಲು
ಯತ್ನವ ಮಾಡಿದೆ ಗಾಂಧೀ!
ಅತಿಶಯ ಕಷ್ಟವನೆಲ್ಲವ ನಗುತಲೆ
ಎದುರಿಸಿ ಮೆರೆದೆ ಗಾಂಧೀ!
...ಮನಾಮವೇ ಸಕಲ ಸಾಧಕ"
ಎನ್ನುತ ಸಾರಿದೆ ಗಾಂಧೀ!
...ಯು
...ರಿಸಿಕೊಟ್ಟೆ, ಗಾಂಧೀ!

ಕುತಲಿದ್ದರೆ—

ನೋಡುವನು!

ವನು! ನಲಿಯುವನು!


Edited, Prin

at The Pr